# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 568

ಸದಸ್ಯರ ಹೆಸರು : ಶ್ರೀ ವಿಜಯ ಸಿಂಗ್(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 11.12.2020

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಸಚಿವರು.

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಬೀದರ್ ಜಿಲ್ಲೆಯಲ್ಲಿರುವ ಅಪೌಷ್ಠಿಕ ಮಕ್ಕಳ ಸಂಖ್ಯೆಯೆಷ್ಟು; (ತಾಲ್ಲೂಕುವಾರು ವಿವರ ನೀಡುವುದು) ಅಪೌಷ್ಠಿಕತೆ ಹೋಗಲಾಡಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ;</td><td>ಬೀದರ್ ಜಿಲ್ಲೆಯಲ್ಲಿ 61 ಮಕ್ಕಳು ಅಪೌಷ್ಠಿಕತೆಯಿಂದ ಬಳಲುತ್ತಿದ್ದಾರೆ. ತಾಲ್ಲೂಕುವಾರು ವಿವರ ಈ ಕೆಳಕಂಡಂತಿದೆ.<br><br>
<table>
<tr><th>ಕ್ರ. ಸಂ.</th><th>ತಾಲ್ಲೂಕು</th><th>ಅಪೌಷ್ಠಿಕ ಮಕ್ಕಳ ಸಂಖ್ಯೆ</th></tr>
<tr><td>1</td><td>ಬೀದರ್</td><td>31</td></tr>
<tr><td>2</td><td>ಭಾಲ್ಕಿ</td><td>02</td></tr>
<tr><td>3</td><td>ಹುಮ್ನಾಬಾದ್</td><td>05</td></tr>
<tr><td>4</td><td>ಔರಾದ್</td><td>13</td></tr>
<tr><td>5</td><td>ಬಸವಕಲ್ಯಾಣ</td><td>10</td></tr>
<tr><td colspan="2">ಒಟ್ಟು</td><td>61</td></tr>
</table>
<br>ಅಪೌಷ್ಠಿಕತೆ ಹೋಗಲಾಡಿಸಲು ಸರ್ಕಾರವು ಈ ಕೆಳಕಂಡಂತೆ ಕ್ರಮ ಕೈಗೊಂಡಿದೆ.<br>ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಡಿ ಪೂರಕ ಪೌಷ್ಠಿಕ ಆಹಾರವನ್ನು ಸಾಮಾನ್ಯ ಮಕ್ಕಳಿಗೆ ಪ್ರತಿ ದಿನ ಘಟಕ ವೆಚ್ಚ ರೂ.8.00ರಂತೆ ಹಾಗೂ ತೀವ್ರ ಅಪೌಷ್ಠಿಕತೆಯುಳ್ಳ ಮಕ್ಕಳಿಗೆ ಘಟಕ ವೆಚ್ಚ ರೂ.12.00ರಂತೆ ನೀಡಲಾಗುತ್ತಿದೆ.<br>
• 3ರಿಂದ 6ವರ್ಷದ ಎಲ್ಲಾ ಮಕ್ಕಳಿಗೆ ವಾರದಲ್ಲಿ 2 ದಿನ ಮೊಟ್ಟೆ ನೀಡಲಾಗುತ್ತಿದೆ.<br>
• 6 ತಿಂಗಳಿಂದ 6 ವರ್ಷದ ಮಕ್ಕಳಿಗೆ ವಾರದಲ್ಲಿ 5 ದಿನ 150 ಎಂ.ಎಲ್ ಕೆನೆಭರಿತ ಹಾಲು ನೀಡಲಾಗುತ್ತಿದೆ.<br>
• ಅತಿಕಡಿಮೆ ತೂಕವುಳ್ಳ ಮಕ್ಕಳಿಗೆ ಹೆಚ್ಚುವರಿ ವಾರದಲ್ಲಿ 3 ದಿನ ಮೊಟ್ಟೆ 200 ಎಂ.ಎಲ್ ಹಾಲು ಹಾಗೂ ಮೊಟ್ಟೆ ಉಪಯೋಗಿಸದ ಮಕ್ಕಳಿಗೆ ವಾರದಲ್ಲಿ 200 ಎಂ.ಎಲ್ ಕೆನೆಭರಿತ ಹಾಲನ್ನು ನೀಡಲಾಗುತ್ತದೆ.<br>
• ಹಿಂದುಳಿದ 5 ಜಿಲ್ಲೆಗಳಾದ ಕಲ್ಬುರ್ಗಿ, ಬೀದರ್, ರಾಯಚೂರು, ಕೊಪ್ಪಳ ಹಾಗೂ ಯಾದಗಿರಿ ಸಾಧಾರಣ ಅಪೌಷ್ಠಿಕ ಮಕ್ಕಳಿಗೆ ಹೆಚ್ಚುವರಿ ವಾರದಲ್ಲಿ 3 ದಿನ ಮೊಟ್ಟೆ 200 ಎಂ.ಎಲ್. ಕೆನೆಭರಿತ ಹಾಲನ್ನು ನೀಡಲಾಗುತ್ತದೆ. ಹಾಗೂ ಚಿಕಿತ್ಸಾ ಆಹಾರಕ್ಕಾಗಿ (Therapeutric food)</td></tr>
</table>

<table>
<tr>
<td></td>
<td></td>
<td>ಪ್ರತಿ ಮಗುವಿಗೆ ವಾರ್ಷಿಕ ರೂ.2000/- ಗಳಂತೆ ವೆಚ್ಚ ಭರಿಸಲಾಗುತ್ತಿದೆ.<br>• ಆರೋಗ್ಯ ಇಲಾಖೆಯ ಸಹಯೋಗದೊಂದಿಗೆ ಪೌಷ್ಠಿಕ ಪುನರ್ವಸತಿ ಕೇಂದ್ರ (NRC)ಗಳಲ್ಲಿ ಅಪೌಷ್ಠಿಕ ಮಕ್ಕಳಿಗೆ ಚಿಕಿತ್ಸೆ ನೀಡಲಾಗುತ್ತಿದೆ.</td>
</tr>
<tr>
<td>ಆ.</td>
<td>ಬೀದರ್ ಜಿಲ್ಲೆಯಲ್ಲಿರುವ ಸಾಂತ್ವನ ಕೇಂದ್ರಗಳ ಸಂಖ್ಯೆ ಎಷ್ಟು; 2016 ರಿಂದ ಇಲ್ಲಿಯವರೆಗೆ ಸಾಂತ್ವನ ಕೇಂದ್ರಕ್ಕೆ ನೀಡಿದ ಅನುದಾನವೆಷ್ಟು (ವಿವರ ನೀಡುವುದು)</td>
<td>ಬೀದರ್ ಜಿಲ್ಲೆಯಲ್ಲಿರುವ ಸಾಂತ್ವನ ಕೇಂದ್ರಗಳ ಸಂಖ್ಯೆ: 05.<br>2016-17ನೇ ಸಾಲಿನಿಂದ 2019-20ನೇ ಸಾಲಿನವರೆಗೆ ಸಾಂತ್ವನ ಕೇಂದ್ರಕ್ಕೆ ಬಿಡುಗಡೆ ಮಾಡಿದ ಅನುದಾನದ ವಿವರ ಕೆಳಕಂಡಂತಿದೆ:
<table>
<tr><th>ವರ್ಷ</th><th>ಬಿಡುಗಡೆ ಮಾಡಿದ ಅನುದಾನ(ರೂಲಕ್ಷಗಳಲ್ಲಿ)</th></tr>
<tr><td>2016-17</td><td>19.25</td></tr>
<tr><td>2017-18</td><td>20.50</td></tr>
<tr><td>2018-19</td><td>20.90</td></tr>
<tr><td>2019-20</td><td>36.00</td></tr>
</table>
</td>
</tr>
<tr>
<td>ಇ.</td>
<td>ಬೀದರ್ ಜಿಲ್ಲೆಯಲ್ಲಿರುವ ವಿಕಲಚೇತನರ ಸಂಖ್ಯೆ ಎಷ್ಟು;(ತಾಲ್ಲೂಕುವಾರು ಮಾಹಿತಿ ನೀಡುವುದು)</td>
<td>ಬೀದರ್ ಜಿಲ್ಲೆಯ ತಾಲ್ಲೂಕುವಾರು ವಿಕಲಚೇತನರ ಮಾಹಿತಿಯು ಈ ಕೆಳಕಂಡಂತಿದೆ:
<table>
<tr><th>ಕ್ರ ಸಂ.</th><th>ತಾಲ್ಲೂಕು ಹೆಸರು</th><th>ವಿಕಲಚೇತನರ ಸಂಖ್ಯೆ</th></tr>
<tr><td>1</td><td>ಬೀದರ್ ಉತ್ತರ</td><td>8185</td></tr>
<tr><td>2</td><td>ಭಾಲ್ಕಿ</td><td>6213</td></tr>
<tr><td>3</td><td>ಹುಮನಾಬಾದ</td><td>6789</td></tr>
<tr><td>4</td><td>ಔರಾದ</td><td>7232</td></tr>
<tr><td>5</td><td>ಬಸವಕಲ್ಯಾಣ</td><td>8316</td></tr>
<tr><td colspan="2">ಒಟ್ಟು</td><td>36645</td></tr>
</table>
</td>
</tr>
<tr>
<td>ಈ</td>
<td>ವಿಕಲಚೇತನ ಪರಿಹಾರ ಪಡೆಯಲು 2018 ರಿಂದ 2020 ರವರೆಗೆ ಎಷ್ಟು ಅರ್ಜಿಗಳು ಬಂದಿವೆ; ಈ ಪೈಕಿ ಇನ್ನೂಎಷ್ಟು ಅರ್ಜಿಗಳು ಪರಿಶೀಲನೆಯಲ್ಲಿವೆ ? (ವಿವರ ನೀಡುವುದು)</td>
<td>2018 ರಿಂದ 2020ರವರೆಗೂ ವಿಕಲಚೇತನರ ಪುನರ್ವಸತಿ ಕಾರ್ಯಕರ್ತರ ಮರಣ ಪರಿಹಾರ ಯೋಜನೆಯಡಿ 03 ಅರ್ಜಿಗಳು ಸ್ವೀಕೃತವಾಗಿದ್ದು, ಸದರಿ 03 ಅರ್ಜಿಗಳಿಗೆ ಮರಣ ಪರಿಹಾರವನ್ನು ಒದಗಿಸಲಾಗಿದೆ.</td>
</tr>
</table>

**(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)**
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತುವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ: ಮಮಇ 234 ಐಸಿಡಿ 2020